# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 246

ಸದಸ್ಯರ ಹೆಸರು : ಶ್ರೀ ರಾಮಚಂದ್ರಗೌಡ (ಪದವೀಧರರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 08.02.2018

ಉತ್ತರಿಸಬೇಕಾದ ಸಚಿವರು : ಮಾನ್ಯ ಬೆಂಗಳೂರು ಅಭಿವೃದ್ಧಿ ಹಾಗೂ ನಗರ ಯೋಜನಾ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಇತ್ತೀಚೆಗೆ ಬೆಳ್ಳಂದೂರು ಕೆರೆಯಲ್ಲಿ ಬೆಂಕಿ ಕಾಣಿಸಿಕೊಂಡಿದ್ದು ನಿಜವೇ; | ಹೌದು |
| ಆ) | ಹಾಗಿದ್ದಲ್ಲಿ, ಬೆಂಕಿ ನಂದಿಸಲು ತೆಗೆದುಕೊಂಡ ಕಾಲಾವಧಿ ಮತ್ತು ಸಿಬ್ಬಂದಿಗಳ ಸಂಖ್ಯೆ ಎಷ್ಟು; | ಬೆಳ್ಳಂದೂರು ಕೆರೆಯಲ್ಲಿನ ಬೆಂಕಿಯನ್ನು ನಂದಿಸಲು ಸುಮಾರು 12 ಗಂಟೆಗಳ ಕಾಲಾವಧಿ ಹಿಡಿದಿರುತ್ತದೆ. ಬೆಂಕಿ ನಂದಿಸುವ ಕಾರ್ಯಕ್ಕಾಗಿ ಬಿಡಿಎ, ಕೆ.ಎಲ್.ಸಿ.ಡಿ.ಎ., ಕೆ.ಎಸ್.ಪಿ.ಸಿ.ಬಿ., ಅಧಿಕಾರಿ ವರ್ಗದವರು ಒಳಗೊಂಡು ಅಗ್ನಿಶಾಮಕ ದಳದ ಸಿಬ್ಬಂದಿ ಹಾಗೂ ಸೈನಿಕ ಸಿಬ್ಬಂದಿ ಸೇರಿದಂತೆ ಒಟ್ಟು 628 ಮಂದಿ ಬೆಂಕಿಯನ್ನು ನಂದಿಸಲು ಕಾರ್ಯಾಚರಣೆಯಲ್ಲಿ ಪಾಲ್ಗೊಂಡಿರುತ್ತಾರೆ. |
| ಇ) | ಕೆರೆಯಲ್ಲಿ ಯಾವ ರೀತಿಯ ತ್ಯಾಜ್ಯ ರಸಾಯನಿಕ ಸೇರಿಕೊಳ್ಳುತ್ತಿದೆ; ಇದು ಯಾವ ಮೂಲಗಳಿಂದ ಕೆರೆಯನ್ನು ಸೇರುತ್ತಿದೆ; (ವಿವರ ನೀಡುವುದು) | ಕೆರೆಯಲ್ಲಿ ಗೃಹ ತ್ಯಾಜ್ಯ / ರೊಚ್ಚು ನೀರು ಸೇರಿಕೊಳ್ಳುತ್ತಿದ್ದು, ಇದು ಬೆಳ್ಳಂದೂರು ಕೆರೆಯ ವ್ಯಾಪ್ತಿಯ ಪ್ರದೇಶದಲ್ಲಿರುವ ವಾಸದ ಗೃಹಗಳು, ಅಪಾರ್ಟ್‌ಮೆಂಟ್‌ಗಳು ಹಾಗೂ ವಾಣಿಜ್ಯ ಸಂಕೀರ್ಣಗಳಿಂದ ಉತ್ಪತ್ತಿಯಾಗುವ ಗೃಹ ತ್ಯಾಜ್ಯ / ರೊಚ್ಚು ನೀರು ಕೆರೆಯನ್ನು ಸೇರುತ್ತಿದೆ. ಇದಲ್ಲದೆ, ಯಾವುದೇ ರಾಸಾಯನಿಕ ತ್ಯಾಜ್ಯ ಕೆರೆಯನ್ನು ಸೇರುತ್ತಿರುವುದಿಲ್ಲ. |
| ಈ) | ಕೆರೆಯನ್ನು ಸೇರುತ್ತಿರುವ ಸಂಸ್ಕರಣಗೊಳ್ಳದೆ ಇರುವ ತ್ಯಾಜ್ಯ ಹಾಗೂ ಕಲುಷಿತ ನೀರಿನ ಪ್ರಮಾಣವೆಷ್ಟು; | ಪ್ರಸ್ತುತ ಬೆಳ್ಳಂದೂರು ಕೆರೆಗೆ ಒಟ್ಟು 123 ದ.ಲ.ಲೀ ದಿನಂಪ್ರತಿ ತ್ಯಾಜ್ಯ ನೀರು ಹರಿಯುತ್ತಿದೆ. ಇದನ್ನು ಕಡಿಮೆಗೊಳಿಸಲು ಬೆಂಗಳೂರು ಜಲಮಂಡಳಿಯಿಂದ ಈಗಾಗಲೇ ಕ್ರಮಗಳನ್ನು ಕೈಗೊಳ್ಳಲಾಗಿದೆ. |
| ಉ) | ಆಗಸ್ಟ್ 2017 ರಂದು ಇದೇ ಕೆರೆಯಲ್ಲಿ ಆಗಾಧ ಪ್ರಮಾಣದ ನೊರೆ ಕಾಣಿಸಿಕೊಂಡಾಗ ಕೆರೆಯನ್ನು ಸೇರುತ್ತಿದ್ದ ಕಲುಷಿತ ನೀರಿನ ಪ್ರಮಾಣವೆಷ್ಟು? | ಆಗಸ್ಟ್ 2017 ರಲ್ಲಿ ಸುಮಾರು 183 ದ.ಲ.ಲೀ ದಿನಂಪ್ರತಿ ತ್ಯಾಜ್ಯ ನೀರು ಕೆರೆಗೆ ಸೇರ್ಪಡೆಗೊಳ್ಳುತ್ತಿತ್ತು. |

ಸಂಖ್ಯೆ: ನಅಇ 67 ಬೆಂಭೂಸ್ವಾ 2018

9/2/18

(ಕೆ.ಜೆ ಜಾರ್ಜ್)
ಬೆಂಗಳೂರು ಅಭಿವೃದ್ಧಿ ಹಾಗೂ
ನಗರ ಯೋಜನಾ ಸಚಿವರು